# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 512 (754)

ವಿಧಾನ ಪರಿಷತ್ ಸದಸ್ಯರ ಹೆಸರು : ಶ್ರೀ ಕವಟಗಿಮಠ ಮಹಾಂತೇಶ ಮಲ್ಲಿಕಾರ್ಜುನ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರಿಸುವವರು : ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಸಚಿವರು ಮತ್ತು ಸಾರ್ವಜನಿಕ ಉದ್ದಿಮೆಗಳ ಸಚಿವರು

ಉತ್ತರಿಸುವ ದಿನಾಂಕ : 10.03.2020

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ರಾಜ್ಯದಲ್ಲಿ ಸ್ಥಾಪನೆಯಾಗುವ ಉದ್ಯಮಗಳಲ್ಲಿ ಕನ್ನಡಿಗರಿಗೆ ಉದ್ಯೋಗ ನೀಡುವ ಕುರಿತು ಹಲವಾರು ಬಾರಿ ಕೂಗು ಕೇಳಿ ಬಂದಿದ್ದು ಈ ಬಗ್ಗೆ ಸರ್ಕಾರ ಯಾವ ಕ್ರಮ ಕೈಗೊಂಡಿದೆ; | ಡಾ: ಸರೋಜಿನಿ ಮಹಿಷಿ ಸಮಿತಿ ವರದಿಯನ್ವಯ 50 ಕ್ಕಿಂತ ಹೆಚ್ಚು ಕಾರ್ಮಿಕರುಳ್ಳ ಬೃಹತ್, ಮಧ್ಯಮ ಮತ್ತು ಸಣ್ಣ ಕೈಗಾರಿಕಾ ಘಟಕಗಳಲ್ಲಿ ಎ ಮತ್ತು ಬಿ ವರ್ಗಗಳಲ್ಲಿ ಕ್ರಮವಾಗಿ ಶೇಕಡ 65 ಮತ್ತು ಶೇಕಡ 80 ಹಾಗೂ ಸಿ ಮತ್ತು ಡಿ ವರ್ಗಗಳಲ್ಲಿ ಶೇಕಡ 100 ರಷ್ಟು ಉದ್ಯೋಗಗಳನ್ನು ಕನ್ನಡಿಗರಿಗೆ/ಸ್ಥಳೀಯರಿಗೆ ನಿಗದಿಪಡಿಸುವಂತೆ ರಾಜ್ಯ ಮಟ್ಟದ ಏಕಗವಾಕ್ಷಿ ಸಮಿತಿ ಸಭೆಗಳು ಹಾಗೂ ಜಿಲ್ಲಾ ಮಟ್ಟದ ಏಕಗವಾಕ್ಷಿ ಸಮಿತಿ ಸಭೆಗಳಲ್ಲಿ ಹೊಸ ಕೈಗಾರಿಕಾ ಘಟಕಗಳನ್ನು ಸ್ಥಾಪಿಸಲು ಒಪ್ಪಿಗೆಯನ್ನು ನೀಡುವ ಸಂದರ್ಭದಲ್ಲಿ ಷರತ್ತನ್ನು ವಿಧಿಸಲಾಗುತ್ತಿದೆ.<br><br>ಚಾಲ್ತಿಯಲ್ಲಿರುವ 50 ಕ್ಕಿಂತ ಹೆಚ್ಚು ಕಾರ್ಮಿಕರುಳ್ಳ ಕೈಗಾರಿಕೆಗಳಲ್ಲಿ ಸದರಿ ವರದಿಯನ್ವಯ ಕನ್ನಡಿಗರಿಗೆ/ ಸ್ಥಳೀಯರಿಗೆ ಉದ್ಯೋಗ ನೀಡಿರುವ ಬಗ್ಗೆ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ನಡೆಯುವ ಜಿಲ್ಲಾ ಮಟ್ಟದ ಏಕಗವಾಕ್ಷಿ ಸಮಿತಿ ಸಭೆಗಳಲ್ಲಿ ಪರಿಶೀಲಿಸಲಾಗುತ್ತದೆ. ನ್ಯೂನ್ಯತೆಗಳು ಕಂಡುಬಂದ ಕೈಗಾರಿಕೆಗಳಿಗೆ ಕೂಡಲೇ ಸರಿಪಡಿಸಲು ಸೂಚನೆಗಳನ್ನು ನೀಡಲಾಗುತ್ತದೆ. |
| ಆ | ರಾಜ್ಯದಲ್ಲಿ ಸ್ಥಾಪನೆಯಾಗುವ ಉದ್ದಿಮೆಗಳಲ್ಲಿ ಕನ್ನಡಿಗರಿಗೆ ಉದ್ಯೋಗ ನೀಡುವುದನ್ನು ಕಡ್ಡಾಯ ಗೊಳಿಸಲಾಗುವುದೇ; | ಅಲ್ಲದೆ, ಕೈಗಾರಿಕಾ ನೀತಿ 2014–19ರನ್ವಯ ಸರ್ಕಾರದಿಂದ ಪ್ರೋತ್ಸಾಹ ಮತ್ತು ರಿಯಾಯಿತಿಗಳನ್ನು ಪಡೆಯುವ ಕೈಗಾರಿಕಾ ಘಟಕಗಳು "ಡಿ" ವರ್ಗದ ಉದ್ಯೋಗಗಳಲ್ಲಿ ಶೇಕಡ 100 ರಷ್ಟು ಹಾಗೂ ಘಟಕದ ಒಟ್ಟಾರೆ ಉದ್ಯೋಗಗಳಲ್ಲಿ ಶೇಕಡ 70 ರಷ್ಟನ್ನು ಕನ್ನಡಿಗರಿಗೆ/ಸ್ಥಳೀಯರಿಗೆ ನೀಡುವ ನಿಬಂಧನೆಯಿದ್ದು, ಅದರಂತೆ ಉದ್ಯೋಗಗಳನ್ನು ನೀಡಿದ ಘಟಕಗಳಿಗೆ ಮಾತ್ರ ಅರ್ಹ ಪ್ರೋತ್ಸಾಹ ಮತ್ತು ರಿಯಾಯಿತಿಗಳನ್ನು ಮಂಜೂರು ಮಾಡಲಾಗುತ್ತಿದೆ. |

| | | |
|---|---|---|
| ಇ | ಡಾ॥ ಸರೋಜಿನಿ ಮಹಿಷಿರವರ ವರದಿಯನ್ನು ಅನುಷ್ಠಾನಕ್ಕೆ ತರುವ ಯೋಚನೆ ಸರ್ಕಾರಕ್ಕಿದೆಯೇ; | ಡಾ॥ ಸರೋಜಿನಿ ಮಹಿಷಿ ವರದಿಯು ಮೇಲಿನಂತೆ ರಾಜ್ಯದಲ್ಲಿ ಅನುಷ್ಠಾನದಲ್ಲಿರುತ್ತದೆ.- |
| ಈ | ಇದ್ದಲ್ಲಿ, ಇದನ್ನು ಯಾವಾಗ ಅನುಷ್ಠಾನಕ್ಕೆ ತರಲಾಗುವುದು? | ಅನ್ವಯಿಸುವುದಿಲ್ಲ. |

**ಸಿಐ 51 ಎಸ್‌ಪಿಐ 2020**

(ಜಗದೀಶ್ ಶೆಟ್ಟರ್)
ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಹಾಗೂ
ಸಾರ್ವಜನಿಕ ಉದ್ದಿಮೆಗಳ ಸಚಿವರು